

# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1039 |
| ಸದಸ್ಯರ ಹೆಸರು | ಶ್ರೀ ಎನ್. ಅಪ್ಪಾಜಿಗೌಡ (ಸ್ಥಳೀಯ ಸಂಸ್ಥೆಗಳಿಂದ ಚುನಾಯಿತರಾದವರು) |
| ಉತ್ತರಿಸಬೇಕಾದ ದಿನಾಂಕ | 21.09.2021 |
| ಉತ್ತರಿಸುವ ಸಚಿವರು | ಗಣಿ ಮತ್ತು ಭೂವಿಜ್ಞಾನ ಹಾಗೂ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಮತ್ತು ವಿಕಲಚೇತನರ, ಹಿರಿಯ ನಾಗರಿಕರ ಸಬಲೀಕರಣ ಸಚಿವರು. |

| ಕ್ರ. ಸಂ. | ಪ್ರಶ್ನೆಗಳು | ಉತ್ತರ |
|---|---|---|
| ಅ. | ಇತ್ತೀಚೆಗೆ ಬಡವರಿಗಾಗಿ ಫ್ರೀ ಸ್ಯಾಂಡ್ ಪಾಲಿಸಿ ತರಲು ಚಿಂತನೆ ನಡೆಸುತ್ತಿರುವುದಾಗಿ ತಿಳಿಸಿದ್ದು, ಈ ಯೋಜನೆ ಜಾರಿಗೆ ತರುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ: (ಸಂಪೂರ್ಣ ವಿವರ ನೀಡುವುದು) | ಸರ್ಕಾರದ ಮುಂದೆ ಪ್ರಸ್ತಾವನೆ ಇರುವುದಿಲ್ಲ. |
| ಆ. | ಇದರಿಂದ ರಾಜ್ಯದಲ್ಲಿ ಮರಳು ಅಭಾವ ಸೃಷ್ಟಿಯಾಗುವುದಿಲ್ಲವೇ: | ಮರಳು ಅಭಾವ ಆಗದ ರೀತಿಯಲ್ಲಿ ಸಾರ್ವಜಿಕರಿಗೆ ಸುಲಭವಾಗಿ ಮರಳು ಪೂರೈಸಲು ಹೊಸ ಮೃಳು ನೀತಿ-2020 ಜಾರಿಗೆ ತರಲಾಗಿದೆ. |
| ಇ. | ಮರಳು ಅಭಾವ ಎದುರಾದಲ್ಲಿ ಸರ್ಕಾರ ಯಾವ ರೀತಿಯ ಕ್ರಮ ಕೈಗೊಳ್ಳಲಾಗುವುದು: | ರಾಜ್ಯದಲ್ಲಿ ಸಾರ್ವಜನಿಕರಿಗೆ ಅಗತ್ಯವಿರುವ ಮರಳನ್ನು ಪೂರೈಸಲು ಈ ಕೆಳಕಂಡ ಕ್ರಮಗಳನ್ನು ಕೈಗೊಳ್ಳಲಾಗಿರುತ್ತದೆ.<br>• ಪ್ರಸ್ತುತ, ರಾಜ್ಯದಲ್ಲಿ ಕರ್ನಾಟಕ ಉಪಖನಿಜ ರಿಯಾಯಿತಿ (ತಿದ್ದುಪಡಿ) ನಿಯಮಗಳು, 2016 ರ ನಿಯಮ 31-T ರಂತೆ, ಟೆಂಡರ್-ಕಂ-ಹರಾಜು ಮೂಲಕ ಗುತ್ತಿಗೆ ಮಂಜೂರಾದ 251 ಮರಳು ಬ್ಲಾಕ್ ಗಳಿದ್ದು, ಸದರಿ ಮರಳು ಬ್ಲಾಕ್ ಗಳಿಂದ ರಾಜ್ಯದ ಸರ್ಕಾರಿ ಹಾಗೂ ಸಾರ್ವಜನಿಕ ಕಾಮಗಾರಿಗಳಿಗೆ ಮರಳನ್ನು ಪೂರೈಸಲಾಗುತ್ತಿದೆ.<br>• ಕರ್ನಾಟಕ ಉಪಖನಿಜ ರಿಯಾಯಿತಿ (ತಿದ್ದುಪಡಿ) ನಿಯಮಗಳು, 2016 ರ ನಿಯಮ 31-ZA ರಂತೆ 95 ಪಟ್ಟಾ ಜಮೀನುಗಳಲ್ಲಿ ಮರಳು ಗಣಿಗಾರಿಕೆ ಲೈಸನ್ಸ್ ನೀಡಲಾಗಿರುತ್ತದೆ. ಈ ಪ್ರದೇಶ ಗಳಿಂದಲೂ ಸಹ ರಾಜ್ಯದ ಸರ್ಕಾರಿ ಹಾಗೂ ಸಾರ್ವಜನಿಕ ಕಾಮಗಾರಿಗಳಿಗೆ ಮರಳನ್ನು ಪೂರೈಸಲಾಗುತ್ತಿದೆ. |

--2

- ಪ್ರಸ್ತುತ ಕರ್ನಾಟಕ ಉಪಖನಿಜ ರಿಯಾಯಿತಿ (ತಿದ್ದುಪಡಿ) ನಿಯಮಗಳು, 2016 ರ ನಿಯಮ 31-ZB ರಂತೆ ಕರಾವಳಿ ನಿಯಂತ್ರಣ ವಲಯ ಪ್ರದೇಶಗಳ ನದಿ ಪಾತ್ರಗಳಲ್ಲಿ ಗುರುತಿಸಿರುವ 27 ಮರಳು ದಿಬ್ಬಗಳಲ್ಲಿ (ಉಡುಪಿ-23 ಮತ್ತು ಉತ್ತರ ಕನ್ನಡ-4) ಮರಳು ತೆರವುಗೊಳಿಸಲು ಕರ್ನಾಟಕ ಕರಾವಳಿ ನಿಯಂತ್ರಣ ವಲಯ ಪ್ರಾಧಿಕಾರದಿಂದ ಅನುಮತಿ ನೀಡಲಾಗಿರುತ್ತದೆ. ಸದರಿ ಮರಳು ದಿಬ್ಬಗಳಿಂದಲೂ ಸಹ ಮರಳನ್ನು ತೆಗೆದು ಸಾರ್ವಜನಿಕ ಹಾಗೂ ಸರ್ಕಾರಿ ಕಾಮಗಾರಿಗಳಿಗೆ ಪೂರೈಸಲು ಕ್ರಮ ವಹಿಸಲಾಗುತ್ತಿದೆ.
- ರಾಜ್ಯದಲ್ಲಿ ಎಂ-ಸ್ಯಾಂಡ್ ಉತ್ಪಾದನೆಗೆ ಪ್ರೋತ್ಸಾಹ ನೀಡಲಾಗುತ್ತಿದ್ದು, ಪ್ರಸ್ತುತ, 289 ಎಂ-ಸ್ಯಾಂಡ್ ಘಟಕಗಳು ಕಾರ್ಯ ನಿರ್ವಹಿಸುತ್ತಿದ್ದು, ಈ ಘಟಕಗಳಿಂದ ರಾಜ್ಯದ ಸಾರ್ವಜನಿಕ ಹಾಗೂ ಸರ್ಕಾರಿ ಕಾಮಗಾರಿಗಳಿಗೆ ಎಂ-ಸ್ಯಾಂಡ್ ಪೂರೈಕೆ ಯಾಗುತ್ತಿರುತ್ತದೆ.
- ಕರ್ನಾಟಕ ಉಪಖನಿಜ ರಿಯಾಯಿತಿ (ತಿದ್ದುಪಡಿ) ನಿಯಮಗಳು, 2017 ರ ನಿಯಮ 31-ZF ರಂತೆ, ವಿದೇಶದಿಂದ ಮರಳು ಆಮದು ಮಾಡಿಕೊಳ್ಳಲು ಅವಕಾಶ ಕಲ್ಪಿಸಲಾಗಿರುತ್ತದೆ.
- ನದಿ ಪಾತ್ರಗಳ ಪಕ್ಕದ ಕೃಷಿ ಜಮೀನುಗಳಲ್ಲಿ ಪ್ರವಾಹದಿಂದ ಸಂಗ್ರಹವಾಗಿರುವ ಮರಳನ್ನು ತೆರವುಗೊಳಿಸಿ ಕೃಷಿ ಯೋಗ್ಯ ಭೂಮಿಯಾಗಿ ಪರಿವರ್ತಿಸಲು ಕೃಷಿ ಜಮೀನು ಮಾಲೀಕರುಗಳಿಗೆ ಸದರಿ ಮರಳನ್ನು ತೆಗೆದು ವಿಲೇಪಡಿಸಲು ಅವಕಾಶ ಕಲ್ಪಿಸಲಾಗಿರುತ್ತದೆ.
- ಮುಂದುವರೆದು, ದಿನಾಂಕ 05.05.2020 ರಂದು ಹೊಸ ಮರಳು ನೀತಿ, 2020 ನ್ನು ಜಾರಿಗೆ ತಂದಿದ್ದು, ಅದರಲ್ಲಿ, I, II & III ನೇ ಶ್ರೇಣಿಯ ಹಳ್ಳ / ತೊರೆಗಳಲ್ಲಿ ಹಾಗೂ ಕೆರೆಗಳು ಲಭ್ಯವಿರುವ ಮರಳನ್ನು ಗ್ರಾಮ ಪಂಚಾಯಿತಿಗಳಿಗೆ ವಿಲೇವಾರಿ ಮಾಡಲು ಅವಕಾಶ ಕಲ್ಪಿಸಲಾಗಿರುತ್ತದೆ.
- ಅದರಂತೆ ಪ್ರಸ್ತುತ 267 ಮರಳು ನಿಕ್ಷೇಪದ ಪ್ರದೇಶಗಳನ್ನು ಗುರುತಿಸಲಾಗಿದ್ದು, ಈ ಪೈಕಿ 165 ಮರಳು ಬ್ಲಾಕ್ ಗಳಿಗೆ ಅಧಿಸೂಚನೆ ಹೊರಡಿಸ ಲಾಗಿದೆ. ಈ ಪೈಕಿ 95 ಮರಳು ನಿಕ್ಷೇಪ ಪ್ರದೇಶಗಳಲ್ಲಿ ಮರಳನ್ನು ತೆಗೆದು, ಸಾರ್ವಜನಿಕರಿಗೆ ಪೂರೈಸಲು ಕ್ರಮ ವಹಿಸಲಾಗಿರುತ್ತದೆ.
- III, VI & V ನೇ ಶ್ರೇಣಿಯ ಹೊಳೆ / ನದಿಗಳಲ್ಲಿ ಅಣೆಕಟ್ಟು / ಜಲಾಶಯ / ಬ್ಯಾರೇಜ್ ಹಾಗೂ ಅಣೆಕಟ್ಟಿನ ಹಿನ್ನೀರಿನ ಪ್ರದೇಶಗಳಲ್ಲಿ ಲಭ್ಯವಿರುವ ಮರಳನ್ನು ತೆಗೆಯಲು ಸರ್ಕಾರಿ ಸ್ವಾಮ್ಯದ ಸಂಸ್ಥೆಗಳಾದ ಮೆ|| ಕರ್ನಾಟಕ ಸ್ಟೇಟ್ ಮಿನರಲ್ಸ್ ಕಾರ್ಪೋರೇಷನ್ (KSMCL) ಮತ್ತು ಮೆ|| ಹಟ್ಟಿ ಚಿನ್ನದ ಗಣಿ ಕಂಪನಿ (HGML) ನಿಯಮಿತ ಇವರಿಗೆ ವಹಿಸಲಾಗಿರುತ್ತದೆ.

<table>
<tr><td></td><td></td><td>

- ಅದರಂತೆ, ಪ್ರಸ್ತುತ ಮೆ|| ಕರ್ನಾಟಕ ಸ್ಟೇಟ್ ಮಿನರಲ್ಸ್ ಕಾರ್ಪೊರೇಷನ್ ಇವರಿಗೆ 46 ಹಾಗೂ ಮೆ|| ಹಟ್ಟಿ ಚಿನ್ನದ ಗಣಿ ಕಂಪನಿ ಇವರಿಗೆ 56 ಮರಳು ಬ್ಲಾಕ್ ಗಳಲ್ಲಿ ಮರಳು ಗಣಿಗಾರಿಕೆ ನಡೆಸಲು ಆಯಾ ಜಿಲ್ಲಾ ಮರಳು ಸಮಿತಿಗಳಿಂದ ಅಧಿಸೂಚನೆ ಹೊರಡಿಸಲಾಗಿರುತ್ತದೆ.

</td></tr>
<tr><td>ಈ.</td><td>ಈ ಯೋಜನೆಯ ರೂಪು-ರೇಷೆಗಳೇನು; ಯಾವ ಕಾಲಮಿತಿಯೊಳಗೆ ಯೋಜನೆ ಅನುಷ್ಠಾನಗೊಳಿಸಲಾಗುತ್ತದೆ: (ಸಂಪೂರ್ಣ ವಿವರ ನೀಡುವುದು)</td><td>ಉದ್ಭವಿಸುವುದಿಲ್ಲ.</td></tr>
<tr><td>ಉ.</td><td>ಮಂಡ್ಯ ಜಿಲ್ಲಾ ವ್ಯಾಪ್ತಿಯಲ್ಲಿ ಪ್ರಸ್ತುತ ಗೃಹ ನಿರ್ಮಾಣ ಮತ್ತು ವಿವಿಧ ಕಾಮಗಾರಿಗಳ ನಿರ್ವಹಣೆಗೆ ಮಾಹೆವಾರು ಎಷ್ಟು ಮರಳಿನ ಬೇಡಿಕೆ ಇದೆ: ಈ ಬೇಡಿಕೆಯನ್ನು ಯಾವ ಮೂಲಗಳಿಂದ ಭರಿಸಲಾಗುತ್ತಿದೆ? (ತಾಲ್ಲೂಕುವಾರು ವಿವರ ನೀಡುವುದು)</td><td>

ಲೋಕೋಪಯೋಗಿ ಹಾಗೂ ಇತರೆ ಕಾಮಗಾರಿ ನಿರ್ವಹಿಸುವ ಇಲಾಖೆಗಳ ಮಾಹಿತಿಯಂತೆ ಮಂಡ್ಯ ಜಿಲ್ಲೆಗೆ ವಾರ್ಷಿಕವಾರು ಅಂದಾಜು 10,06,673 ಮೆಟ್ರಿಕ್ ಟನ್ ಪ್ರಮಾಣದ ಮರಳಿನ ಅವಶ್ಯಕತೆ ಇರುತ್ತದೆ. ತಾಲ್ಲೂಕುವಾರು ಮರಳಿನ ಬೇಡಿಕೆ ಪ್ರಮಾಣದ ವಿವರಗಳು ಈ ಕೆಳಕಂಡಂತಿದೆ.

<table>
<tr><th>ಕ್ರ. ಸಂ.</th><th>ತಾಲ್ಲೂಕು</th><th>ಅಂದಾಜು ಮರಳಿನ ಬೇಡಿಕೆ ಪ್ರಮಾಣ (ಮೆಟ್ರಿಕ್ ಟನ್ನುಗಳಲ್ಲಿ)</th></tr>
<tr><td>1.</td><td>ಮಂಡ್ಯ</td><td>209625</td></tr>
<tr><td>2.</td><td>ಕೆ.ಆರ್. ಪೇಟೆ</td><td>186084</td></tr>
<tr><td>3.</td><td>ಮದ್ದೂರು</td><td>109774</td></tr>
<tr><td>4.</td><td>ಮಳವಳ್ಳಿ</td><td>81098</td></tr>
<tr><td>5.</td><td>ನಾಗಮಂಗಲ</td><td>176045</td></tr>
<tr><td>6.</td><td>ಶ್ರೀರಂಗಪಟ್ಟಣ</td><td>132044</td></tr>
<tr><td>7.</td><td>ಪಾಂಡವಪುರ</td><td>112003</td></tr>
</table>

ಮಂಡ್ಯ ಜಿಲ್ಲಾ ವ್ಯಾಪ್ತಿಯಲ್ಲಿ 17 ಎಂ-ಸ್ಯಾಂಡ್ ಘಟಕಗಳು ಕಾರ್ಯ ನಿರ್ವಹಿಸುತ್ತಿದ್ದು, ಸದರಿ ಘಟಕಗಳಿಂದ ಹಾಗೂ ತುಮಕೂರು, ರಾಮನಗರ ಮತ್ತು ಹಾಸನ ಜಿಲ್ಲೆಗಳಿಂದ ಎಂ-ಸ್ಯಾಂಡ್ ಪೂರೈಕೆ ಯಾಗುತ್ತಿರುತ್ತದೆ.

</td></tr>
</table>

ಸಂಖ್ಯೆ ಸಿಐ 481 ಎಂಎಂಎನ್ 2021

(ಆಚಾರ್ ಹಾಲಪ್ಪ ಬಸಪ್ಪ)
ಗಣಿ ಮತ್ತು ಭೂವಿಜ್ಞಾನ ಹಾಗೂ
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ
ವಿಕಲಚೇತನರ, ಹಿರಿಯ ನಾಗರಿಕರ
ಸಬಲೀಕರಣ ಸಚಿವರು.